# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:** | **600** |
| **ಸದಸ್ಯರ ಹೆಸರು:** | **ಶ್ರೀ ಮರಿತಿಬ್ಬೇಗೌಡ** |
| **ಉತ್ತರಿಸುವ ದಿನಾಂಕ:** | **10-03-2020** |
| **ಉತ್ತರಿಸುವವರು:** | **ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು** |

| | ಪ್ರಶ್ನೆಗಳು | ಉತ್ತರ |
|---|---|---|
| ಅ | ರಾಜ್ಯದಲ್ಲಿ ರೇಷ್ಮೆ ಬೆಳೆ ಅಭಿವೃದ್ಧಿಗೆ ರೂಪಿಸಿರುವ ಯೋಜನೆಗಳೇನು;(ವಿವರ ನೀಡುವುದು) | ರೇಷ್ಮೆ ಇಲಾಖೆಯಿಂದ ರೇಷ್ಮೆ ಬೆಳೆ ಅಭಿವೃದ್ಧಿಗಾಗಿ ಈ ಕೆಳಕಂಡ ಯೋಜನೆಗಳನ್ನು ರೂಪಿಸಲಾಗಿರುತ್ತದೆ.<br>1. ಸುಧಾರಿತ ಹಿಪ್ಪುನೇರಳೆ ತೋಟ ಬೆಳೆಯಲು, ನರ್ಸರಿ ಬೆಳೆಸಲು ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ ಒದಗಿಸಲಾಗುತ್ತಿದೆ.<br>2. ಹಿಪ್ಪುನೇರಳೆ ತೋಟಕ್ಕೆ ಟ್ರಂಚಿಂಗ್ - ಮಲ್ಚಿಂಗ್ ಮಾಡಲು ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ.<br>3. ಹಿಪ್ಪುನೇರಳೆ ತೋಟಕ್ಕೆ ಹನಿ ನೀರಾವರಿ ಅಳವಡಿಕೆಗೆ ಶೇ.೯೦ರಷ್ಟು ಸಹಾಯಧನ.<br>4. ಹಿಪ್ಪುನೇರಳೆ ತೋಟದ ಮಣ್ಣಿನ ಫಲವತ್ತತೆಗಾಗಿ ಜೈವಿಕಗೊಬ್ಬರ ಬಳಕೆ, ಹಿಪ್ಪುನೇರಳೆ ಸೊಪ್ಪಿನ ಇಳುವರಿ ಹಾಗೂ ಗುಣಮಟ್ಟ ಹೆಚ್ಚಿಸುವ ಸಲುವಾಗಿ ಸಸ್ಯ ಸಂವರ್ಧಕ ಹಾಗೂ ಬೇರು ಕೊಳೆ ನಿಯಂತ್ರಣಕ್ಕಾಗಿ ಸಹಾಯಧನ.<br>5. ಹಿಪ್ಪುನೇರಳೆ ಮರ ಕೃಷಿ ಪದ್ಧತಿ ಉತ್ತೇಜನಕ್ಕಾಗಿ ಸಹಾಯಧನ.<br>6. ರೇಷ್ಮೆ ಹುಳು ಸಾಕಾಣಿಕೆ ಮನೆ/ಮೌಂಟಿಂಗ್ ಹಾಲ್ ನಿರ್ಮಾಣಕ್ಕೆ ಸಹಾಯಧನ.<br>7. ಸೋಂಕು ನಿವಾರಕಗಳ ಪೂರೈಕೆ ಮತ್ತು ಸಲಕರಣೆಗಳಿಗೆ ಸಹಾಯಧನ ಹಾಗೂ ತಾಂತ್ರಿಕ ಮಾಹಿತಿ.<br>8. ರೋಟರಿ ಚಂದ್ರಿಕೆಗಳ ಖರೀದಿಗೆ ಸಹಾಯಧನ<br>9. ದ್ವಿತಳಿ ಚಾಕಿ ವೆಚ್ಚಕ್ಕೆ ಸಹಾಯಧನ.<br>10. ಚಾಕಿ ಸಾಕಾಣಿಕಾ ಕೇಂದ್ರದ ಸ್ಥಾಪನೆಗೆ / ಸಲಕರಣೆಗಳಿಗೆ ಸಹಾಯಧನ.<br>11. ನೂತನ ತಾಂತ್ರಿಕತೆಗಳ ಅಳವಡಿಕೆಗೆ ರೈತರಿಗೆ ತರಬೇತಿ ಮತ್ತು ಕಾರ್ಯಾಗಾರ.<br>12. ರೇಷ್ಮೆ ಗೂಡಿನ ಧಾರಣೆ ಕುಸಿತ ಸಂದರ್ಭದಲ್ಲಿ ರೇಷ್ಮೆ ಬೆಳೆಗಾರರಿಗೆ ರಕ್ಷಣಾತ್ಮಕ ದರ ನೀಡಲಾಗುತ್ತಿದೆ.<br>13. ದ್ವಿತಳಿ ಬಿತ್ತನೆ ಬೆಳೆಗಾರರು ಹಾಗೂ ಮೈಸೂರು ಬಿತ್ತನೆ ಬೆಳೆಗಾರರು ಬೆಳೆಯುವ ಬಿತ್ತನೆ ಗೂಡಿಗೆ ಪ್ರೋತ್ಸಾಹಧನ / ಬೋನಸ್ ನೀಡಲಾಗುತ್ತಿದೆ.<br>14. ರೇಷ್ಮೆ ಬಿತ್ತನೆ ಬೆಳೆಗಾರರಿಗೆ ಉತ್ಪಾದಕತೆ ಮತ್ತು ಗುಣಮಟ್ಟ ಆಧರಿಸಿ ಬಿತ್ತನೆ ಗೂಡಿಗೆ ಪ್ರೋತ್ಸಾಹಧನ ನೀಡಲಾಗುತ್ತಿದೆ.<br>15. ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಉತ್ಪಾದಿಸುವ ದ್ವಿತಳಿ ರೇಷ್ಮೆ ಗೂಡಿಗೆ ಕೆ.ಜಿ.ಗೆ ರೂ.10/-ರಂತೆ ಸಾಗಾಣಿಕೆ ವೆಚ್ಚ. |
| ಆ | ರಾಜ್ಯದಲ್ಲಿ ಉತ್ಪಾದಿಸುತ್ತಿರುವ ರೇಷ್ಮೆ ತಳಿಗಳಾವುವು; | ಶುದ್ಧ ಮೈಸೂರು ತಳಿ, ಶುದ್ಧ ದ್ವಿತಳಿ, ಮಿಶ್ರತಳಿ ಹಾಗೂ ದ್ವಿತಳಿ ಸಂಕರಣ ತಳಿಗಳ ರೇಷ್ಮೆ ಗೂಡನ್ನು ಉತ್ಪಾದಿಸಲಾಗುತ್ತಿದೆ. |
| ಇ | ಯಾವ ಯಾವ ಜಿಲ್ಲೆಗಳಲ್ಲಿ ಯಾವ ಯಾವ ತಳಿಗಳನ್ನು ಯಾವ ಪ್ರಮಾಣ ದಲ್ಲಿ ಉತ್ಪಾದಿಸಲಾಗುತ್ತಿದೆ; | ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ವಿವಿಧ ತಳಿಗಳ ರೇಷ್ಮೆ ಗೂಡುಗಳ ಉತ್ಪಾದನೆ ಮಾಡಲಾಗುತ್ತಿದ್ದು, ಜನವರಿ-2020ರ ಅಂತ್ಯಕ್ಕೆ ಜಿಲ್ಲಾವಾರು ಉತ್ಪಾದಿಸಲಾಗಿರುವ ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |

| | | |
|---|---|---|
| ಈ | ರೇಷ್ಮೆ ಬೆಳೆಗಾರರಿಗೆ ಸರ್ಕಾರದಿಂದ ಉಚಿತ ಹಾಗೂ ರಿಯಾಯಿತಿ ಸೌಲಭ್ಯಗಳನ್ನು ನೀಡಲಾಗುತ್ತಿದೆಯೆ; | ಹೌದು, |
| ಉ | ಹಾಗಾದಲ್ಲಿ ನೀಡಲಾಗುತ್ತಿರುವ ಸೌಲಭ್ಯಗಳ ವಿವರಗಳನ್ನು ನೀಡುವುದು; | ಮೈಸೂರು ಬಿತ್ತನೆ, ದ್ವಿತಳಿ ಬಿತ್ತನೆ ಹಾಗೂ ಸಂಕರಣ ಗೂಡು ಉತ್ಪಾದನೆಗಾಗಿ ಸೋಂಕು ನಿವಾರಕಗಳು, ಹಾಸಿಗೆ ಸೋಂಕುನಿವಾರಕಗಳು, ಸಸ್ಯ ಸಂವರ್ಧಕಗಳು ಮತ್ತು ಊಜಿ ಬಲೆಗಳನ್ನು ಅನುದಾನ ಲಭ್ಯತೆಯನುಸಾರ ರೇಷ್ಮೆ ಬೆಳೆಗಾರರಿಗೆ ಉಚಿತವಾಗಿ ನೀಡಲಾಗುತ್ತಿದೆ. ಹಾಗೂ ಹಿಪ್ಪುನೇರಳೆ ತೋಟ/ನರ್ಸರಿ ಸ್ಥಾಪನೆ, ಪ್ರತ್ಯೇಕ ಹುಳು ಸಾಕಾಣಿಕೆ ಮನೆ, ಪ್ರತ್ಯೇಕ ಮೌಂಟಿಂಗ್ ಹಾಲ್ ಹಾಗೂ ಹುಳು ಸಾಕಾಣಿಕಾ ಸಲಕರಣೆಗಳ ಖರೀದಿಗಾಗಿ ಸಹಾಯಧನ ಸೌಲಭ್ಯಗಳನ್ನು ಎಲ್ಲಾ ರೇಷ್ಮೆ ಬೆಳೆಗಾರರಿಗೆ ನೀಡಲಾಗುತ್ತಿದೆ. |
| ಊ | ಮಾರುಕಟ್ಟೆಯಲ್ಲಿ ರೇಷ್ಮೆ ಗೂಡಿಗೆ ಬೆಲೆ ಕುಸಿತವಾದಾಗ ಸರ್ಕಾರ ಪ್ರೋತ್ಸಾಹಧನ ನೀಡಲು ಖಾಯಂ ಯೋಜನೆಯನ್ನು ರೂಪಿಸಿದೆಯೇ? (ವಿವರ ನೀಡುವುದು) | ರೇಷ್ಮೆ ಗೂಡಿಗೆ ಬೆಲೆ ಕುಸಿತವಾದಾಗ ಸರ್ಕಾರದಿಂದ ಪ್ರೋತ್ಸಾಹಧನ ನೀಡುವ ಖಾಯಂ ಯೋಜನೆ ಇರುವುದಿಲ್ಲ. ಆದರೆ ರೇಷ್ಮೆ ಗೂಡಿನ ಧಾರಣೆಯು ಕುಸಿತಗೊಂಡಾಗ ಪ್ರೋತ್ಸಾಹಧನವನ್ನು ರಕ್ಷಣಾತ್ಮಕ ದರವಾಗಿ ನೀಡುವ ಕಾರ್ಯಕ್ರಮ ಜಾರಿಯಲ್ಲಿದೆ. ಹಾಗೂ ದ್ವಿತಳಿ ರೇಷ್ಮೆ ಗೂಡಿನ ದರ ಪ್ರತಿ ಕೆ.ಜಿ.ಗೆ ರೂ.260/- ಹಾಗೂ ಮಿಶ್ರತಳಿ ಗೂಡಿನ ದರ ಪ್ರತಿ ಕೆ.ಜಿ.ಗೆ ರೂ.220/-ಕ್ಕಿಂತ ಕಡಿಮೆಯಾದಾಗ ಸರ್ಕಾರ ಆದೇಶ ಸಂಖ್ಯೆ:ತೋಇ 115 ರೇಕೃವಿ 2018 ದಿನಾಂಕ:26.07.2018ರಂತೆ ದ್ವಿತಳಿ ಬಿತ್ತನೆ ಗೂಡಿಗೆ ಗರಿಷ್ಠ ರೂ.50/- ಹಾಗೂ ಮಿಶ್ರತಳಿ ಗೂಡಿಗೆ ಗರಿಷ್ಠ ರೂ.40/- ಮೀರದಂತೆ ರಕ್ಷಣಾತ್ಮಕ ದರ ನೀಡಲು ಕ್ರಮವಹಿಸ ಲಾಗುತ್ತಿದೆ. |

**ರೇಷ್ಮೆ 32 ರೇಕೃವಿ 2020**

**(ನಾರಾಯಣಗೌಡ)**
**ಪೌರಾಡಳಿತ ಹಾಗೂ ತೋಟಗಾರಿಕೆ**
**ಮತ್ತು ರೇಷ್ಮೆ ಸಚಿವರು**

ವಿಧಾನ ಪರಿಷತ್ ಪ್ರಶ್ನೆ ಸಂಖ್ಯೆ 600ಕ್ಕೆ ಅನುಬಂಧ

| | | ತಳಿವಾರು ರೇಷ್ಮೆ ಗೂಡು ಉತ್ಪಾದನಾ ವಿವರ (ಮೆ.ಟನ್‌ಗಳಲ್ಲಿ ) (ಜನವರಿ2020ರ ಅಂತ್ಯಕ್ಕೆ) | | | |
|---|---|---|---|---|---|
| ಕ್ರ. ಸಂ | ಜಿಲ್ಲೆಗಳು | ಮಿಶ್ರತಳಿ | ದ್ವಿತಳಿ (ಬಿತ್ತನೆ ಹಾಗೂ ಸಂಕರಣ ಸೇರಿದಂತೆ) | ಮೈಸೂರು ತಳಿ | ಒಟ್ಟು |
| 1 | ಬೆಂಗಳೂರು ಗ್ರಾಮಾಂತರ | 3057.621 | 278.258 | | 3335.879 |
| 2 | ಬೆಂಗಳೂರು ನಗರ | 582.247 | 475.739 | | 1057.986 |
| 3 | ಚಿಕ್ಕಬಳ್ಳಾಪುರ | 9905.039 | 392.671 | | 10297.710 |
| 4 | ಚಿತ್ರದುರ್ಗ | 223.603 | 479.710 | | 703.313 |
| 5 | ದಾವಣಗೆರೆ | 25.301 | 116.453 | | 141.754 |
| 6 | ಕೋಲಾರ | 7242.307 | 1067.853 | | 8310.160 |
| 7 | ರಾಮನಗರ | 15495.773 | 600.412 | | 16096.185 |
| 8 | ಶಿವಮೊಗ್ಗ | 11.263 | 67.007 | | 78.270 |
| 9 | ತುಮಕೂರು | 1191.622 | 1193.155 | | 2384.777 |
| 10 | ಚಾಮರಾಜನಗರ | 155.304 | 36.902 | | 192.206 |
| 11 | ಚಿಕ್ಕಮಗಳೂರು | 0.000 | 21.480 | | 21.480 |
| 12 | ದಕ್ಷಿಣ ಕನ್ನಡ | 0.000 | 0.850 | | 0.850 |
| 13 | ಹಾಸನ | 0.000 | 711.866 | | 711.866 |
| 14 | ಕೊಡಗು | 0.000 | 3.553 | | 3.553 |
| 15 | ಮಂಡ್ಯ | 16171.419 | 1326.492 | | 17497.911 |
| 16 | ಮೈಸೂರು | 271.811 | 699.431 | | 971.242 |
| 17 | ಉಡುಪಿ | 0.000 | 1.971 | | 1.971 |
| 18 | ಬಳ್ಳಾರಿ | 25.376 | 960.072 | | 985.448 |
| 19 | ಬೀದರ್ | 20.833 | 101.326 | | 122.159 |
| 20 | ಕಲಬುರ್ಗಿ | 1.262 | 194.463 | | 195.725 |
| 21 | ಕೊಪ್ಪಳ | 0.000 | 124.053 | | 124.053 |
| 22 | ರಾಯಚೂರು | 0.000 | 192.781 | | 192.781 |
| 23 | ಯಾದಗಿರಿ | 0.000 | 71.306 | | 71.306 |
| 24 | ಬಾಗಲಕೋಟೆ | 6.295 | 293.306 | | 299.601 |
| 25 | ಬೆಳಗಾವಿ | 28.461 | 343.004 | | 371.465 |
| 26 | ವಿಜಯಪುರ | 1.745 | 106.387 | | 108.132 |
| 27 | ಧಾರವಾಡ | 3.733 | 51.180 | | 54.913 |
| 28 | ಗದಗ | 10.484 | 231.203 | | 241.687 |
| 29 | ಹಾವೇರಿ | 53.538 | 843.299 | | 896.837 |
| 30 | ಉತ್ತರ ಕನ್ನಡ | 0.000 | 17.922 | | 17.922 |
| 31 | ಮೈಸೂರು ಬಿತ್ತನೆ ವಲಯ (ಕುಣಿಗಲ್ ಮತ್ತು ಮಾಗಡಿ) | 0.000 | 0.000 | 563.645 | 563.645 |
| | ರಾಜ್ಯದ ಒಟ್ಟು | 54485.037 | 11004.105 | 563.645 | 66052.787 |